ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ಚಾಮರಾಜನಗರದಲ್ಲಿ ವಸತಿ ಇಲಾಖೆಯಿಂದ ಟೌನ್‌ಶಿಪ್ ನಿರ್ಮಾಣ

ಶ್ರೀ ಎಸ್ ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

263 (312) ಮಾನ್ಯ ವಸತಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಚಾಮರಾಜನಗರದಲ್ಲಿ ವಸತಿ ಇಲಾಖೆ ಅಥವಾ ಹೌಸಿಂಗ್ ಬೋರ್ಡ್ ವತಿಯಿಂದ ನಿವೇಶನಗಳನ್ನು ರಚನೆ ಮಾಡಿ, ಟೌನ್‌ಶಿಪ್ ನಿರ್ಮಿಸಲು ಯೋಜನೆಯನ್ನು ರೂಪಿಸಲಾಗಿದೆಯೇ; ಯೋಜನೆಯ ರೂಪುರೇಷೆಗಳೇನು ; (ವಿವರ ಒದಗಿಸುವುದು)

(ಆ) ಚಾಮರಾಜನಗರ, ಮೈಸೂರು ಜಿಲ್ಲೆಗಳಲ್ಲಿ ತಾಲ್ಲೂಕು ಕೇಂದ್ರಗಳ ಅವ್ಯವಸ್ಥಿತ ಬೆಳವಣಿಗೆಯನ್ನು ತಡೆಯಲು, ನಿವೇಶನಗಳ ಬೇಡಿಕೆ ಬಗ್ಗೆ ಸರ್ವೆ ನಡೆಸಿ; ವಸತಿ ಯೋಜನೆಗಳನ್ನು ರೂಪಿಸಲು ಕ್ರಮ ಜರುಗಿಸಲಾಗುವುದೇ ;

(ಇ) ಮೈಸೂರು ನಗರ ಸಮೀಪದ ಇಮ್ಮಾವು ಬಳಿ ವಸತಿ ಇಲಾಖೆ/ ಹೌಸಿಂಗ್ ಬೋರ್ಡ್ ವತಿಯಿಂದ ಕೈಗೊಳ್ಳಲು ಉದ್ದೇಶಿಸಲಾಗಿದ್ದ ಟೌನ್‌ಶಿಪ್/ವಸತಿ ಯೋಜನೆ ಯಾವ ಹಂತದಲ್ಲಿದೆ ?